# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 360 |
| 2 | ಸದಸ್ಯರ ಹೆಸರು | ಶ್ರೀ ನಸೀರ್ ಅಹ್ಮದ್<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| 3 | ಉತ್ತರಿಸಬೇಕಾದ ದಿನಾಂಕ | 23.09.2020 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಹೊಸದಾಗಿ ನಿರ್ಮಿಸಲಾದ ತಾಲ್ಲೂಕುಗಳಿಗೆ ಮೂಲ ಸೌಕರ್ಯ ಕಲ್ಪಿಸಲು ಇದುವರೆಗೆ ನಿಗದಿಪಡಿಸ ಲಾದ ಅನುದಾನವೆಷ್ಟು; | 2017-18ನೇ ಸಾಲಿನ ಆಯವ್ಯಯದಲ್ಲಿನ ಘೋಷಣೆಯನ್ವಯ ರಾಜ್ಯದಲ್ಲಿ 50 ಹೊಸ ತಾಲ್ಲೂಕುಗಳನ್ನು ರಚಿಸಲಾಗಿದೆ. ಹೊಸದಾಗಿ ರಚಿಸಿರುವ 50 ತಾಲ್ಲೂಕುಗಳು ಕಾರ್ಯಾರಂಭ ಮಾಡಿ, ಆಡಳಿತಾತ್ಮಕ ಪ್ರಕ್ರಿಯೆಯನ್ನು ಪ್ರಾರಂಭಿಸಲು ಹಾಗೂ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸುವ ಸಲುವಾಗಿ ಕೆಳಕಂಡಂತೆ ಅನುದಾನ ನಿಗಧಿಪಡಿಸಲಾಗಿದೆ.<br><br>ಕ್ರ. ಸಂ. / ವರ್ಷ / ನಿಗಧಿಪಡಿಸಿರುವ ಅನುದಾನ<br>1 / 2017-18 / ರೂ.10.00 ಕೋಟಿ<br>2 / 2018-19 / ರೂ.7.00 ಕೋಟಿ<br>3 / 2019-20 / ರೂ.7.00 ಕೋಟಿ<br>4 / 2020-21 / ರೂ. 3.00 ಕೋಟಿ |
| ಆ) | ಇಲ್ಲಿಯವರೆಗೆ ಬಿಡುಗಡೆ ಮಾಡಲಾದ ಅನುದಾನವೆಷ್ಟು ಹಾಗೂ ಖರ್ಚು ಮಾಡಿದ ಅನುದಾನವೆಷ್ಟು? | ನೂತನ 50 ತಾಲ್ಲೂಕುಗಳಿಗೆ ಕಂದಾಯ ಇಲಾಖೆಯಿಂದ ಬಿಡುಗಡೆ ಮಾಡಿದ ಅನುದಾನದ ವಿವರ ಕೆಳಕಂಡಂತಿದೆ.<br><br>ಕ್ರ. ಸಂ. / ವರ್ಷ / ಬಿಡುಗಡೆ ಮಾಡಿದ ಅನುದಾನ<br>1 / 2017-18 / ಪ್ರತಿ ತಾಲ್ಲೂಕಿಗೆ ರೂ.10.00 ಲಕ್ಷ<br>2 / 2018-19 / ಪ್ರತಿ ತಾಲ್ಲೂಕಿಗೆ ರೂ.10.00 ಲಕ್ಷ<br>3 / 2019-20 / ಪ್ರತಿ ತಾಲ್ಲೂಕಿಗೆ ರೂ.5.00 ಲಕ್ಷ<br>4 / 2020-21 / ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನದನ್ವಯ ಬಿಡುಗಡೆ ಮಾಡಲು ಕ್ರಮವಹಿಸ ಲಾಗುತ್ತಿದೆ.<br><br>ಈ ಅನುದಾನವನ್ನು ತಾಲ್ಲೂಕು ಆಡಳಿತಕ್ಕೆ ಅವಶ್ಯವಿರುವ ಸಾಮಗ್ರಿಗಳು ಹಾಗೂ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಉಪಯೋಗಿಸಲಾಗುತ್ತಿದೆ. |
| ಇ) | ಸಂಪೂರ್ಣ ಮೂಲಭೂತ ವ್ಯವಸ್ಥೆ ಕಲ್ಪಿಸಲು ಇನ್ನೂ ಎಷ್ಟು ದಿನಗಳ ಕಾಲಾವಕಾಶ ಬೇಕು? (ವಿವರ ನೀಡುವುದು) | ಹೊಸದಾಗಿ ರಚಿಸಲಾಗಿರುವ 50 ತಾಲ್ಲೂಕುಗಳಲ್ಲಿ 13 ತಾಲ್ಲೂಕುಗಳಿಗೆ ಮಿನಿ ವಿಧಾನಸೌಧ ಕಟ್ಟಡವನ್ನು ನಿರ್ಮಿಸಲು ಆಡಳಿತಾತ್ಮಕ ಅನುಮೋದನ ನೀಡಲಾಗಿದೆ. ಉಳಿದ ತಾಲ್ಲೂಕು ಗಳಲ್ಲಿ ಮಿನಿವಿಧಾನಸೌಧ ನಿರ್ಮಿಸಲು ಸೂಕ್ತ ಸ್ಥಳವನ್ನು ಗುರುತಿಸಿ ಪ್ರಸ್ತಾವನೆ ಸಲ್ಲಿಸುವಂತೆ ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ತಿಳಿಸಲಾಗಿದೆ.<br><br>ಪ್ರಮುಖ ಇಲಾಖೆಗಳಾದ ಒಳಾಡಳಿತ, ಕೃಷಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್, ಆರೋಗ್ಯ ಮತ್ತು ಕುಟುಂಬ ಕಲ್ಯಾಣ, ಪ್ರಾಥಮಿಕ ಶಿಕ್ಷಣ, ಸಮಾಜ ಕಲ್ಯಾಣ ಮತ್ತು ಲೋಕೋಪಯೋಗಿ ಇಲಾಖೆಗಳನ್ನು ಪ್ರಾರಂಭಿಸಲು ಅಗತ್ಯ ಕ್ರಮ ಕೈಗೊಳ್ಳುವಂತೆ ಸಂಬಂಧಿಸಿದ ಇಲಾಖೆಗಳ |

| | | |
|---|---|---|
| | | ಮುಖ್ಯಸ್ಥರಿಗೆ ಸೂಚಿಸಲಾಗಿದೆ.<br><br>ಹೊಸದಾಗಿ ರಚನೆಯಾದ ತಾಲ್ಲೂಕುಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು ರಾಜ್ಯದ ಹಣಕಾಸಿನ ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ. ಈ ಪ್ರಸ್ತಾವನೆಯು ಸಂಪನ್ಮೂಲಗಳ ಕ್ರೋಢೀಕರಣ ಹಾಗೂ ಆರ್ಥಿಕ ಇತಿಮಿತಿಗಳನ್ನು ಒಳಗೊಂಡಿರುವುದರಿಂದ ಕಾಲಾವಧಿಯನ್ನು ನಿಗದಿಪಡಿಸಿರುವುದಿಲ್ಲ. |

<u>ಸಂಖ್ಯೆ: ಕಂಇ 18 ಎಲ್‌ಆರ್‌ಡಿ 2020</u>

**(ಆರ್ ಅಶೋಕ)**
ಕಂದಾಯ ಸಚಿವರು